# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1644

ಉತ್ತರ ದಿನಾಂಕ : 20.03.2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಜಲಧಾರೆ ಯೋಜನೆಯು ಕಾರ್ಯರೂಪಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಯಾವ ಯಾವ ಜಿಲ್ಲೆಗಳಲ್ಲಿ ಈ ಯೋಜನೆಯನ್ನು ಜಾರಿಗೊಳಿಸಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಜಲಧಾರೆ ಯೋಜನೆಯು ಕಾರ್ಯರೂಪಕ್ಕೆ ಬಂದಿದೆ.<br><br>ರಾಜ್ಯದ ಎಲ್ಲಾ ಗ್ರಾಮೀಣ ಜನವಸತಿಗಳಿಗೆ ಕುಡಿಯಲು ಶುದ್ಧ ನೀರನ್ನು ನದಿ ಮೂಲಗಳಿಂದ ಒದಗಿಸುವ ಉದ್ದೇಶವನ್ನು ಇರಿಸಿಕೊಂಡು ಸಮಗ್ರವಾದ ಜಲಧಾರೆ ಯೋಜನೆಯನ್ನು 2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಲಾಗಿರುತ್ತದೆ.<br><br>ಯೋಜನೆಯ ಮೊದಲನೇ ಹಂತಕ್ಕೆ ಸಚಿವ ಸಂಪುಟ ಮತ್ತು ಹಣಕಾಸು ಇಲಾಖೆಯ ಒಪ್ಪಿಗೆ ಪಡೆಯಲಾಗಿರುತ್ತದೆ.<br><br>2019-20ನೇ ಸಾಲಿನಲ್ಲಿ ಜಲಧಾರೆ ಯೋಜನೆಯ ಮೊದಲ ಹಂತವಾಗಿ ವಿಜಯಪುರ, ಮಂಡ್ಯ, ರಾಯಚೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಕೈಗೊಳ್ಳಲು ಅನುಮೋದನೆಯಾಗಿದೆ. |
| ಆ. | ಈ ಯೋಜನೆಯ ಅನುಷ್ಠಾನಕ್ಕೆ ಸರ್ಕಾರ ನಿಗಧಿಪಡಿಸಿದ ಅನುದಾನವೆಷ್ಟು; ಅದರಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೊಂಡಿದೆ; (ಜಿಲ್ಲಾವಾರು, ಪ್ರತ್ಯೇಕವಾಗಿ ಮಂಡ್ಯ ಜಿಲ್ಲೆಯ ತಾಲ್ಲೂಕುವಾರು ಮಾಹಿತಿ ನೀಡುವುದು) | ಜಲಧಾರೆಯ ಮೊದಲನೇ ಹಂತದಲ್ಲಿ ರೂ.4000.00ಕೋಟಿಗಳಲ್ಲಿ ವಿಜಯಪುರ, ಮಂಡ್ಯ, ರಾಯಚೂರು ಮತ್ತು ಕೋಲಾರ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ದೊರಕಿರುತ್ತದೆ.<br><br>ಪ್ರಸ್ತುತ AIIB ಸಂಸ್ಥೆಯವರ ಸಹಯೋಗದೊಂದಿಗೆ ಮೊದಲನೇ ಹಂತದಲ್ಲಿ ವಿಜಯಪುರ ಮತ್ತು ಮಂಡ್ಯ ಜಿಲ್ಲೆಯ ಸಮಗ್ರ ಕುಡಿಯುವ ನೀರಿನ ಯೋಜನೆಯನ್ನು ಕೈಗೆತ್ತಿಕೊಳ್ಳಲು ನಿರ್ಣಯಿಸಲಾಗಿರುತ್ತದೆ. ವಿವರಗಳು ಕೆಳಕಂಡಂತಿದೆ.<br><br>ಕ್ರಸಂ / ಜಿಲ್ಲೆ / ಅಂದಾಜು ಮೊತ್ತ (ರೂ. ಕೋಟಿಗಳಲ್ಲಿ)<br>1 / ವಿಜಯಪುರ / 2703.00<br>2 / ಮಂಡ್ಯ / 1679.00<br><br>ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಪ್ರಾಥಮಿಕ ಯೋಜನಾ ವರದಿಯನ್ನು ತಯಾರಿಸಲಾಗಿರುತ್ತದೆ. ಯೋಜನೆಗೆ ತಾಲ್ಲೂಕುವಾರು ಅನುದಾನ ನಿಗಧಿಪಡಿಸಲಾಗಿರುವುದಿಲ್ಲ. |
| ಇ. | ಜಲಧಾರೆ ಯೋಜನೆ ಗುರಿ ಮತ್ತು ಉದ್ದೇಶಗಳೇನು; (ವಿವರ ನೀಡುವುದು) | ಕುಡಿಯುವ ನೀರನ್ನು ನದಿಗಳು ಅಥವಾ ಜಲಾಶಯಗಳಿಂದ ಉಪಯೋಗಿಸಿಕೊಂಡು, ನೀರನ್ನು ಶುದ್ಧೀಕರಿಸಿ ಜಲಧಾರೆ ಯೋಜನೆಯ ಮೂಲಕ ಹಂತ ಹಂತವಾಗಿ ರಾಜ್ಯದ ಎಲ್ಲಾ ಗ್ರಾಮೀಣ ಪ್ರದೇಶದಲ್ಲಿ ಅನುಷ್ಠಾನಗೊಳಿಸಲು ಸರ್ಕಾರವು ನಿರ್ಣಯಿಸಿರುತ್ತದೆ. ಸಂಪನ್ಮೂಲಗಳ ಲಭ್ಯತೆಯನುಗುಣವಾಗಿ ಯೋಜನೆಯನ್ನು ಅನುಷ್ಠಾನಗೊಳಿಸಿ, ಗ್ರಾಮೀಣ ಭಾಗದ ಜನರ ಕುಡಿಯುವ ನೀರಿನ ಸಮಸ್ಯೆಗೆ ಶಾಶ್ವತವಾಗಿ ಪರಿಹಾರ ಒದಗಿಸುವುದು ಜಲಧಾರೆ ಯೋಜನೆಯ ಗುರಿ ಮತ್ತು ಉದ್ದೇಶವಾಗಿರುತ್ತದೆ. |

| ಈ. | ಮಂಡ್ಯ ಜಿಲ್ಲೆಯಲ್ಲಿ ಜಲಧಾರೆ ಯೋಜನೆಯ ಅನುಷ್ಠಾನದಿಂದ ಎಷ್ಟು ಗ್ರಾಮಗಳಿಗೆ ಕುಡಿಯುವ ನೀರಿನ ಸಮಸ್ಯೆಯನ್ನು ಪರಿಹರಿಸಲಾಗುವುದು; (ವಿವರ ನೀಡುವುದು) | ಮಂಡ್ಯ ಜಿಲ್ಲೆಯಲ್ಲಿ ಜಲಧಾರೆ ಯೋಜನೆಯ ಅನುಷ್ಠಾನದಿಂದ 1085 ಗ್ರಾಮಗಳಿಗೆ ಕುಡಿಯುವ ನೀರಿನ ಸಮಸ್ಯೆಯನ್ನು ಪರಿಹರಿಸಲಾಗುವುದು. |
|---|---|---|

| ಕ್ರ.ಸಂ. | ತಾಲ್ಲೂಕುಗಳು | ಜಲಧಾರೆ ಯೋಜನೆಯಡಿ ಪರಿಗಣಿಸಿರುವ ಗ್ರಾಮಗಳ ಸಂಖ್ಯೆ |
|---|---|---|
| 1 | ಕೃಷ್ಣರಾಜಪೇಟೆ | 306 |
| 2 | ಮದ್ದೂರು | 150 |
| 3 | ಮಳವಳ್ಳಿ | 103 |
| 4 | ಮಂಡ್ಯ | 191 |
| 5 | ನಾಗಮಂಗಲ | 208 |
| 6 | ಪಾಂಡವಪುರ | 70 |
| 7 | ಶ್ರೀರಂಗಪಟ್ಟಣ | 57 |
| | **ಒಟ್ಟು** | **1085** |

ಸಂ.ಗ್ರಾಕುನೀ&ನೈಇ/126/ಗ್ರಾನೀಸ(5)/2020

**(ಕೆ.ಎಸ್. ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು